# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 965
ಸದಸ್ಯರ ಹೆಸರು : ಶ್ರೀ ಮೋಹನ್ ಕುಮಾರ್ ಕೊಂಡಜ್ಜಿ (ನಾಮನಿರ್ದೇಶನ ಹೊಂದಿದವರು)
ಉತ್ತರಿಸುವ ದಿನಾಂಕ : 13-03-2020
ಉತ್ತರಿಸುವವರು : ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು.

| ಕ್ರ.ಸಂ | ಪ್ರಶ್ನೆಗಳು | ಉತ್ತರ |
|---|---|---|
| ಅ | ರಾಮನಗರ ಜಿಲ್ಲೆ, ಮಾಗಡಿ ತಾಲ್ಲೂಕು, ಕುದೂರು ಹೋಬಳಿ, ಬಿಸ್ಕೂರು ಗ್ರಾಮ ಪಂಚಾಯತ್ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿರುವ 19 ಜನ ವಾಟರ್‌ಮೆನ್, 01 ಬಿಲ್‌ಕಲೆಕ್ಟರ್ ಹಾಗೂ 02 ಮಂದಿ ಬೆರಳಚ್ಚುಗಾರರಿಗೆ ಕಳೆದ 08 ತಿಂಗಳಿಂದ ವೇತನ ಪಾವತಿಯಾಗದೇ ಸದರಿ ನೌಕರರು ಕಷ್ಟವನ್ನು ಅನುಭವಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ವೇತನ ಪಾವತಿಯಾಗದಿರಲು ಕಾರಣಗಳೇನು; | ರಾಮನಗರ ಜಿಲ್ಲೆ, ಮಾಗಡಿ ತಾಲ್ಲೂಕು, ಬಿಸ್ಕೂರು ಗ್ರಾಮ ಪಂಚಾಯತಿಯಲ್ಲಿ ವಾಟರ್‌ಮೆನ್ ವೃಂದದಲ್ಲಿ 19 ನೌಕರರು, ಬಿಲ್‌ಕಲೆಕ್ಟರ್ ವೃಂದದಲ್ಲಿ ಒಬ್ಬ ನೌಕರರು ಮತ್ತು ಬೆರಳಚ್ಚುಗಾರ ವೃಂದದಲ್ಲಿ ಇಬ್ಬರು ನೌಕರರು ಕಾರ್ಯನಿರ್ವಹಿಸುತ್ತಿರುತ್ತಾರೆ. ಗ್ರಾಮ ಪಂಚಾಯತಿ ನೌಕರರಿಗೆ ಸರ್ಕಾರದ ನಿಧಿಯಿಂದ ವೇತನ ಪಾವತಿಸಲು ಪಂಚಾಯತಿ ಅಭಿವೃದ್ಧಿ ಅಧಿಕಾರಿಗಳು ಪಂಚತಂತ್ರ ತಂತ್ರಾಂಶದಲ್ಲಿ ದಾಖಲಿಸಿರುವ ಸೇವಾ ವಿವರವನ್ನು ತಾಲ್ಲೂಕು ಪಂಚಾಯತಿ ಕಾರ್ಯನಿರ್ವಾಹಕ ಅಧಿಕಾರಿಗಳು ಮತ್ತು ಜಿಲ್ಲಾ ಪಂಚಾಯತಿ ಉಪಕಾರ್ಯದರ್ಶಿಗಳು ಪರಿಶೀಲನೆ ಮಾಡಿದ್ದು, ಅದರಂತೆ ವಾಟರ್‌ಮೆನ್ ವೃಂದದಲ್ಲಿ 15 ನೌಕರರು, ಬಿಲ್‌ಕಲೆಕ್ಟರ್ ವೃಂದದಲ್ಲಿ ಒಬ್ಬ ನೌಕರರು ಮತ್ತು ಬೆರಳಚ್ಚುಗಾರ ವೃಂದದಲ್ಲಿ ಒಬ್ಬ ನೌಕರರು ಅರ್ಹರಿರುತ್ತಾರೆ. ಅದರಂತೆ ಸರ್ಕಾರದ ನಿಧಿಯಿಂದ ವೇತನ ಪಾವತಿಸಲಾಗುತ್ತಿದೆ.<br><br>ಗ್ರಾಮ ಪಂಚಾಯತಿಯಲ್ಲಿ ಸರ್ಕಾರದ ನಿಧಿಯಿಂದ ವೇತನ ಪಾವತಿಸಲು ಒಳಪಡದಿರುವ ನೌಕರರು ಮತ್ತು ಹೆಚ್ಚುವರಿಯಾಗಿ ನೇಮಕ ಮಾಡಿಕೊಂಡಿರುವ ನೌಕರರಿಗೆ ಗ್ರಾಮ ಪಂಚಾಯತಿ ನಿಧಿಯಿಂದ ವೇತನ ಪಾವತಿಸಲು ತಿಳಿಸಲಾಗಿದೆ. ಈ ನೌಕರರಿಗೆ ಅಕ್ಟೋಬರ್ 2019 ರವರೆಗೆ ವೇತನ ಪಾವತಿಸಲಾಗಿದೆ. ಗ್ರಾಮ ಪಂಚಾಯತಿಯ ಕಂದಾಯ ವಸೂಲಿಯು ಕಡಿಮೆಯಾಗಿರುವುದರಿಂದ ವೇತನವನ್ನು ಪಾವತಿ ಮಾಡಲು ಸಾಧ್ಯವಾಗಿರುವುದಿಲ್ಲ. ಕಂದಾಯ ವಸೂಲಿ ಮಾಡಿ ವೇತನ ಪಾವತಿಸಲು ಕ್ರಮ ಕೈಗೊಳ್ಳಲಾಗುತ್ತದೆ. |
| ಆ | ಸದರಿ ಜಿಲ್ಲೆಯ ಎಷ್ಟು ಗ್ರಾಮ ಪಂಚಾಯತ್‌ಗಳಲ್ಲಿ ಸಮಯಕ್ಕೆ ಸರಿಯಾಗಿ ವೇತನ ಪಾವತಿಯಾಗಿರುವುದಿಲ್ಲ; ಸದರಿ ವಿಷಯವು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ತೆಗೆದುಕೊಂಡ ಕ್ರಮಗಳೇನು; | ರಾಮನಗರ ಜಿಲ್ಲೆಯ 127 ಗ್ರಾಮ ಪಂಚಾಯತಿಗಳಲ್ಲಿ ಎಲ್ಲಾ ತಿಂಗಳ ವೇತನವು ಸಕಾಲದಲ್ಲಿ ಪಾವತಿಯಾಗಿಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆ.<br><br>ರಾಜ್ಯದ ಗ್ರಾಮ ಪಂಚಾಯತಿ ನೌಕರರಿಗೆ ಕಾರ್ಮಿಕ ಇಲಾಖೆಯ ಅಧಿಸೂಚನೆಯಂತೆ ಕನಿಷ್ಠ ವೇತನ ಮತ್ತು ತುಟ್ಟಿಭತ್ಯೆಯನ್ನು 5ನೇ ದಿನಾಂಕದೊಳಗೆ ತಪ್ಪದೆ ವೇತನ ಪಾವತಿ ಮಾಡಲು ಕ್ರಮ ಕೈಗೊಳ್ಳುವಂತೆ ಎಲ್ಲಾ ಗ್ರಾಮ ಪಂಚಾಯತಿಗಳಿಗೆ ನಿರ್ದೇಶನ ನೀಡಲಾಗಿದೆ. |
| ಇ | ಸದರಿ ನೌಕರರಿಗೆ ಯಾವಾಗ ವೇತನ ಸಂದಾಯವಾಗುವುದು? | ಗ್ರಾಮ ಪಂಚಾಯಿತಿ ನೌಕರರಿಗೆ ಗ್ರಾಮ ಪಂಚಾಯಿತಿಗಳು ಸಮರ್ಪಕವಾಗಿ ವೇತನ ಪಾವತಿಸದಿರುವ ಅಂಶವನ್ನು ಮನಗಂಡು ಸರ್ಕಾರವು ಮಾರ್ಚ್ 2018 ರಿಂದ ಕಾರ್ಮಿಕ ಇಲಾಖೆ ನಿಗದಿಪಡಿಸಿರುವ ವೇತನವನ್ನು ಪಾವತಿಸಲು ಆದೇಶಿಸಿದೆ. ಸರ್ಕಾರದಿಂದ ಗ್ರಾಮ ಪಂಚಾಯತಿ ಸಿಬ್ಬಂದಿಗಳ ವೇತನಕ್ಕಾಗಿ 2019-20ನೇ ಸಾಲಿನಲ್ಲಿ ರೂ.519.95 ಕೋಟಿಗಳ ಅನುದಾನವನ್ನು 4 ತ್ರೈಮಾಸಿಕ ಕಂತಿನಲ್ಲಿ ಬಿಡುಗಡೆಗೊಳಿಸಲಾಗಿದೆ.<br><br>14ನೇ ಹಣಕಾಸು ಆಯೋಗದ ಶೇ. 10 ರಷ್ಟು ಅನುದಾನವನ್ನು ಆಡಳಿತ ವೆಚ್ಚಕ್ಕಾಗಿ ಉಪಯೋಗಿಸಿಕೊಳ್ಳಲು ಅವಕಾಶವಿದ್ದು, ಅದರಂತೆ ಗ್ರಾಮ ಪಂಚಾಯತಿ ನೌಕರರ ವೇತನಕ್ಕಾಗಿ ಕೊರತೆಯಾಗುವ ಅನುದಾನವನ್ನು ಶೇ. 10 ರ ಮಿತಿಯೊಳಗೆ ವೇತನಕ್ಕಾಗಿ ಭರಿಸಿಕೊಳ್ಳುವಂತೆ ಈಗಾಗಲೇ ಎಲ್ಲಾ ಗ್ರಾಮ ಪಂಚಾಯತಿಗಳಿಗೆ ತಿಳಿಸಲಾಗಿದೆ. |

ಸಂ. ಗ್ರಾಅಪ 264 ಗ್ರಾಪಂಅ 2020

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರು.